# ಬಿಳಿ ಮುಗಿಲ ಕೆಳಗೆ

(ಕವನ ಸಂಕಲನ)

ಸಿ. ಜಿ. ಹಿರೇಮಠ

ಲಡಾಯಿ ಪ್ರಕಾಶನ
೪೨, ಪ್ರಸಾದ ಲಾಜ್
ಗದಗ

"BILI MUGILA KELAGE "

A Collection of Poems

by C. G. Hiremath
Teacher, Govt Higher Primary School,
Laxmeshwar-582 116

Published by
"LADAI" Prakashana
42, Prasad Lodge, Gadag





ಪುಟಗಳು ೪೮

ಪ್ರಕಟಣೆಯ ವರ್ಷ ೨೦೦೨

ಬೆಲೆ ರೂ ೩೦

ಮುಖಪುಟ ಕ ಕ ಮಕಾಳೆ

ಮುದ್ರಕರು ವಿಶಾಲ ಪ್ರಿಂಟರ್ಸ್, ಗದಗ ☏ 36674

# ಮುನ್ನುಡಿ

ದಶದಶಕಗಳಿಂದ ಮೆರೆದ ಕಾವ್ಯ ದಿಕ್ಕು ತಪ್ಪುತ್ತಿದೆ. ಪ್ರಸ್ತುತ ಸಾಮಾಜಿಕ ಸ್ಥಿತ್ಯಂತರ ಸಂದರ್ಭದಲ್ಲಿ ಕಾವ್ಯ ಸಂವಹನ ಮಾಧ್ಯಮದ ಪ್ರಮುಖವಾಹಿನಿಯಿಂದ ದೂರ ಸರಿಯುತ್ತಿದೆ ಎನ್ನಿಸುತ್ತಿದೆ. ಇದಕ್ಕೆ ಕಾರಣಗಳನ್ನು ಹುಡುಕಬೇಕಿದೆ ಸ್ವತಃ ಕವಿಗಳೇ ಆ ಕ್ರಿಯೆಗಳಿಗಿಳಿಯಬೇಕಿದೆ. ಕಾವ್ಯ ಶಕ್ತಿಯ ಕುರಿತು ಚಿಂತಿಸಬೇಕಿದೆ ಮತ್ತೊಮ್ಮೆ ಪರಿಣಾಮಕಾರಿ ಅಭಿವ್ಯಕ್ತಿಯ ಮಾಧ್ಯಮದ ಸ್ಥಾನ ಕಾವ್ಯಕ್ಕೆ ಸಿಗಬೇಕಿದೆ

'ಕಾವ್ಯ' ಗುರಿಯೋ, ಮಾಧ್ಯಮವೋ ಎನ್ನುವ ಪ್ರಶ್ನೆ ಎಂದಿಗಿಂತ ಇಂದು ಹೆಚ್ಚು ಕಾಡುತ್ತಿದೆ. ಇಂದು ಕಾವ್ಯ ಕೇವಲ ಕವಿಯ ಆಂತರಿಕ ತುಡಿತಗಳ ಅಭಿವ್ಯಕ್ತಿಯಾಗಿ ವ್ಯಕ್ತಿಗತ ನೆಲೆಯಲ್ಲಿಯೇ ಸ್ಥಗಿತಗೊಳ್ಳುತ್ತಿದೆ. ವೈಯಕ್ತಿಕ ಅನುಭವ, ತುಡಿತಗಳು ಸಮಷ್ಟಿ ಪ್ರಜ್ಞೆಗೆ ಸ್ಪಂದಿಸಬೇಕಿದೆ. ಮತ್ತೆ ಇದು 'ವಸ್ತು' ವಿಗೆ ಸಂಬಂಧಿಸಿದ ಚರ್ಚೆ. ಪ್ರಸ್ತುತ ಸಾಮಾಜಿಕ ಸ್ಥಿತ್ಯಂತರ ತಲೆಮಾರುಗಳ ಮಧ್ಯಗೊಂದಲ ಸೃಷ್ಟಿಸಿದೆ. ಒಂದು ಕಾಲದ ಮೌಲ್ಯಗಳು ಅಪಹಾಸ್ಯಕ್ಕೀಡಾಗುತ್ತಿವೆ. ಹೊಸ ತಲೆಮಾರು ತನ್ನ ಹಿಂದಿನ ತಲೆಮಾರಿನ ಮೌಲ್ಯಗಳನ್ನು ಸಿನಿಕತನದಿಂದ ನೋಡುತ್ತಿದೆ. ಆದಕ್ಕೆ ಕಾರಣಗಳಿವೆ. ಮೌಲ್ಯಗಳು ಸಾಮಾಜಿಕ ಜೀವನದಲ್ಲಿ ನಿಷ್ಪ್ರಯೋಜಕವಾಗುತ್ತಿವೆ. ಒಂದು ಕಡೆ ಮೌಲ್ಯಗಳ ಅಧಃಪತನ ಇನ್ನೊಂದೆಡೆ ಹೊಸ ಮೌಲ್ಯಗಳ ಹುಡುಕಾಟ. ಇಂಥ ಸಂಘರ್ಷಮಯಿ ಬದುಕಿನಲ್ಲಿ ಕವಿ ಕಾವ್ಯ-ವಸ್ತುವಿನ ಅರಸುವಿಕೆಯಲ್ಲಿ ಹೈರಾಣಾಗಿದ್ದಾನೆ. ಚಿಂತನೆ ಒಂದಾದರೆ ಬದುಕು ಇನ್ನೊಂದಾಗುತ್ತಿದೆ. ಹೀಗಾಗಿ ಮೌಲ್ಯ, ಮೌಲ್ಯಕ್ಕೊಂದು ತಾರ್ಕಿಕ ವಿಕಾಸ ಸಾಧ್ಯವಾಗದಂತಾಗಿದೆ. ಇಂಥ ಸಂದರ್ಭದಲ್ಲಿ ತನ್ನ ತುಡಿತ ತುಮುಲಗಳನ್ನು ಹೊರಚೆಲ್ಲುವುದು ಮಾತ್ರ ಕಾವ್ಯಾಭಿವ್ಯಕ್ತಿಯ ಹಿಂದಿನ ಉದ್ದೇಶವಾಗಿದೆ. ಇಂಥ ಕಾವ್ಯಾಭಿವ್ಯಕ್ತಿಯ ಉದ್ದೇಶ ಸೀಮಿತವಾಗುತ್ತಿದೆ. ಇಂಥ ಸೀಮಿತತೆಯೇ ಕಾವ್ಯ ಪರಿಣಾಮಕಾರಿ ಸಂವಹನ ಮಾಧ್ಯಮದ ಪ್ರಮುಖವಾಹಿನಿಯಿಂದ ದೂರ ಸರಿಯಲು ಕಾರಣವಾಗಿದೆ.

ಮೇಲಿನ ಆಲೋಚನೆಗಳ ಹಿನ್ನೆಲೆಯಲ್ಲಿಯೇ ಇಂದಿನ ಕಾವ್ಯಲೋಕವನ್ನು ಗಮನಿಸಬೇಕಿದೆ. ಸಿ. ಜಿ. ಹಿರೇಮಠರ 'ಬಿಳಿ ಮುಗಿಲ ಕೆಳಗೆ' ಕವನ ಸಂಕಲನವೂ ಇದಕ್ಕೆ ಹೊರತಾಗಿಲ್ಲ. ಮೊದಲ ಕವನ ಸಂಕಲನಗಳಿಗಿರುವ ಎಲ್ಲ ಮಿತಿಗಳು ಈ ಸಂಕಲನಕ್ಕೂ ಅನ್ವಯಿಸುತ್ತವೆ. ಆದನ್ನು ಮೀರಿ ಇಡೀ ಸಂಕಲನದಲ್ಲಿಯ ಕವನಗಳು ಎಲ್ಲೂ

ಒಂದಕ್ಕೊಂದು ವೈರುಧ್ಯಕ್ಕೊಳಗಾಗದೇ ನಿರ್ದಿಷ್ಟ ದಿಕ್ಕನ್ನು ಸೂಚಿಸುತ್ತವೆ. ಪ್ರೇಮ, ಪ್ರೀತಿ ಬರದ ನೆರಳಿನ ಭಯಾನಕ ಬದುಕು, ಕೋಮು ವಿಷಕ್ಕೆ ಪ್ರತಿಯಾಗಿ ಸಹ ಬಾಳ್ವೆಯ ತುಡಿತ ನೀತಿ ರಹಿತ ರಾಜಕಾರಣದೆಡೆಗಿನ ಮುನಿಸು, ಭ್ರಷ್ಟತೆ ಎಂಬ ಅನಿವಾರ್ಯ ಸಾಮಾಜಿಕ ಕ್ರಿಯೆ ಈ ಎಲ್ಲ ವಿಷಯಗಳ ಸುತ್ತ ಇಲ್ಲಿನ ಕವನಗಳು ಸುತ್ತುತ್ತವೆ. 'ಬಸಪ್ಪನ ಮನ್ಯಾಗ ಅಲ್ಲಾ' ಎಂಬ ಕವನ ಗ್ರಾಮೀಣ ಪರಿಸರದಲ್ಲಿ ದೇವರು ಯಾವಧರ್ಮ, ಯಾವ ಜಾತಿಯದೇ ಇರಲಿ ಅದೊಂದು ನೆಪ ಮಾತ್ರ ಅಲ್ಲಿರುವ ಎಲ್ಲ ಜನ ಸೇರಿ ಧಾರ್ಮಿಕ ಆಚರಣೆಗೆ ತೊಡಗುವ ಕುರಿತು ಗ್ರಾಮ ಧರ್ಮವನ್ನು ಹೇಳುತ್ತದೆ. ಈಗ ಗ್ರಾಮಗಳಿಗೂ ವ್ಯಾಪಿಸುತ್ತಿರುವ ಕೋಮು ವಿಷ ಪ್ರವಾಹವನ್ನು ಗಮನಿಸಿಯೇ ಕವಿ ಆತಂಕದಿಂದ ಈ ಕವನ ರಚಿಸಿದ್ದಾರೆ. ಅಂತಿಮವಾಗಿ ಪ್ರೀತಿ-ಸಹಬಾಳ್ವೆ ಕವಿಯ ಆಶಯ 'ಬಿಳಿ ಮುಗಿಲ ಕೆಳಗೆ', 'ಈ ನಲದ ಬರಗಾಲ' - ಈ ಕವನಗಳು ಬರಗಾಲದ ಭೀಕರತೆಯನ್ನು ಬರದ ಕಾರಣದಿಂದ ಸ್ಥಗಿತಗೊಂಡ ಗ್ರಾಮೀಣ ಅಂತರ್ ಸಂಬಂಧೀ ಬದುಕನ್ನು ಸ್ಪಷ್ಟವಾಗಿ ಚಿತ್ರಿಸುತ್ತವೆ. ಕವಿಯಾದವನು ಬದುಕು ಪ್ರಿಯ, ಅವನು ಯುದ್ಧ ವಿರೋಧಿ ಯಾಗಬೇಕು. ಇಲ್ಲದಿದ್ದರೆ ಅವನು ಕವಿಯಾಗಲಾರ. ಹೆಣಗಳ ಲೆಕ್ಕ ಕೊಡುವ ಗುಮಾಸ್ತನಾಗುತ್ತಾನೆ. 'ಕದನದ ನಂತರದ ಕಳವಳ' ಎಂಬ ಹಿರೇಮಠರ ಕವನ ಯುದ್ಧ ಸಂಬಂಧೀ ಸಾವುಗಳು, ಕಳೆದುಕೊಂಡ ಸಂಬಂಧಗಳು ಈ ಹಿನ್ನೆಲೆಯು ಕಳವಳವನ್ನು ವ್ಯಕ್ತ ಪಡಿಸುತ್ತದೆ.

ಅಧಿಕಾರ, ಹಣ ಮನುಷ್ಯನ ನಗುವನ್ನೇ ಕಳೆದು ಹಾಕುತ್ತವೆ. ನಗುವದು ನಿಸರ್ಗ ಕ್ರಿಯೆ ಎಂದು ಹೇಳುವ ಹಿರೇಮಠರು 'ಸ್ವಲ್ಪ ನಗ್ತಿಯಾ' ಎಂಬ ಕವನದಲ್ಲಿ ವಿಡಂಬನಾತ್ಮಕವಾಗಿ ಧನ ಮದ-ಅಧಿಕಾರ ಮದವೇರಿದ ಜನರನ್ನು ತರಾಟೆಗೆ ತೆಗೆದುಕೊಂಡಿದ್ದಾರೆ. ಹೀಗೆ ವಿವಿಧ ವಸ್ತುಗಳ ಕುರಿತು ಕಾವ್ಯ ಹೆಣೆದ ಸಿ. ಜಿ. ಹಿರೇಮಠರು ಮೂಲಭೂತವಾಗಿ ಸಂವೇದನಾಶೀಲ ಗೆಳೆಯ. ಕನಸು ಕಾಣುವ ಕಣ್ಣು, ಮತ್ತೊಬ್ಬರ ನೋವಿಗೆ ಮಿಡಿದ ಹೃದಯ ಹೊಂದಿದವರು. ಈ ಸಂಕಲನದಲ್ಲಿ ತಮ್ಮ ಕಾವ್ಯ ವಸ್ತುವಿನ ದಿಕ್ಕು ತೋರಿದ್ದಾರೆ. ಮುಂದಿನ ದಿನಗಳಲ್ಲಿ ಕಾವ್ಯ ಶಕ್ತಿಯ ಬಗ್ಗೆ ಇನ್ನೂ ಹೆಚ್ಚಿನ ಗಮನ ಹರಿಸಿ ಬೆಳೆಯಲೆಂದು ಆಶಿಸುತೇನೆ.

ಧಾರವಾಡ

**ಡಾ. ಸಿದ್ದನಗೌಡ ಪಾಟೀಲ**

# ನನ್ನ ಮಾತು

ಸುಮಾರು ಇಪ್ಪತ್ತು ವರ್ಷಗಳ ಹಿಂದಿನ ಕವನಗಳಿವು ಅಂದು ಶಿರಹಟ್ಟಿ ತಾಲೂಕ ಬಿಜ್ಜೂರಿಗೆ ಪ್ರಾಥಮಿಕ ಶಾಲಾ ಶಿಕ್ಷಕನೆಂದು ನೇಮಣೆಕೆ ಆದಾಗ ನಾನು ಇಂಥ ಚಿಕ್ಕ ಗ್ರಾಮದಲ್ಲಿ ನೌಕರಿ ಮಾಡುವುದು ಹೇಗೆಂದು ಚಿಂತಿಸಿದ್ದೆ ಆದರೆ ಅಲ್ಲಿಯ ಆತ್ಮೀಯ ವಾತಾವರಣ ನನ್ನನ್ನು ಹನ್ನೆರಡು ವರ್ಷ ಅಲ್ಲಿಯೇ ಇರುವಂತೆ ಮಾಡಿತು. ಆ ವಾತಾವರಣವೇ ಕವನ ಬರೆಯುವುದಕ್ಕೆ ಪ್ರೇರಣೆ.

ನನ್ನ ಕವನಗಳಲ್ಲಿರುವುದು ಕಲ್ಪನೆಗಳಲ್ಲ, ಆ ಹಳ್ಳಿಯ ವಾಸ್ತವಾಂಶಗಳೆ.

ಬಾಬರಿ ಮಸೀದಿಯ ಉರಿ ದೇಶದ ತುಂಬೆಲ್ಲ ಮಾತಾದಾಗ ನಾನಿರುವಲ್ಲಿ 'ಆಲೇ ಹಬ್ಬ'ವನ್ನು ಜಾತಿ ಭೇದ ಭಾವಗಳೆನ್ನದೇ ಆಚರಿಸಿದರು. ಆವಾಗಲೇ 'ಬಸಪ್ಪನ ಮನ್ಯಾಗ ಅಲ್ಲಾ' ಹುಟ್ಟಿತು. ಬರ ಬಿದ್ದಾಗ ''ಬಿಳಿ ಮುಗಿಲ ಕೆಳಗೆ'' ರಚನೆಯಾಯಿತು. ಹೀಗೆ ಆ ಊರು ನನ್ನ ಕವನಗಳಿಗೆ ಸ್ಫೂರ್ತಿ ನೀಡಿತು.

'ಪ್ರಪಂಚ', 'ಸಂಕ್ರಮಣ', 'ಲಡಾಯಿ', 'ಪುಂಡಲೀಕ' ಪತ್ರಿಕೆಗಳಲ್ಲಿ ನನ್ನ ಕವನಗಳನ್ನು ಪ್ರಕಟಿಸಿದ ಸಂಪಾದಕರಿಗೆ ಕೃತಜ್ಞತೆಗಳು

''ಸರ್ ಮತ್ತೇನು ಬರೆದಿರಿ ?'' ಎಂದು ಕೇಳುತ್ತ ನನ್ನ ಬರಹಕ್ಕೆ ಚಾಲನೆ ನೀಡಿದ ಸಹೋದ್ಯೋಗಿ ಗೆಳೆಯ ಬಿ ಎಚ್. ಮಡಿವಾಳರವರನ್ನು ನೆನೆಯಲೇಬೇಕು.

ಲಕ್ಷ್ಮೇಶ್ವರಕ್ಕೆ ೧೯೯೨ ರಲ್ಲಿ ವರ್ಗವಾಗಿ ೨ನೇ ನಂಬರ ಶಾಲೆಗೆ ಬಂದಾಗ ಸಹೋದ್ಯೋಗಿ ಬಾಂಧವರು ಕವನ ಬರೆಯಲು ಪ್ರೋತ್ಸಾಹಿದುರು. ಅವರನ್ನು ಮರೆಯಲಾರೆ.

ಗೆಳೆಯ ಮಂಜು ಬೊಮ್ಮನಕಟ್ಟಿ ಪರಿಚಯವಾದ ನಂತರ ನನ್ನ ಬರಹದ ಬಗ್ಗೆ ಚರ್ಚೆ ಮಾಡಿ ಸೂಕ್ತ ಸಲಹೆ ನೀಡಿದ. ಅವನ ಕಾಳಜಿ ಮರೆಯುವಂತಿಲ್ಲ.

ಕವನ ಸಂಕಲನ ಹೊರತರಬೇಕು ಎನ್ನುತ್ತಲೇ ನಾಲ್ಕೈದು ವರ್ಷಗಳು ಉರುಳಿದವು. ಆಗ ಆಕಸ್ಮಾತ್ ಪ್ರೊ. ಎಂ ಡಿ. ಒಕ್ಕುಂದ ಲಕ್ಷ್ಮೇಶ್ವರಕ್ಕೆ ಬಂದರು. ಅಲ್ಲಿಂದ ನನ್ನ ಮತ್ತು ಅವರ ಸಾಹಿತ್ಯಿಕ ಗೆಳೆತನ ಬೆಳೆದು ಇಂದು ಒಬ್ಬ ಸಹೋದರನಂತೆ, ಗೆಳೆಯನಂತೆ, ಮಾರ್ಗದರ್ಶಿಯಂತೆ ಆತ್ಮೀಯರಾಗಿಬಿಟ್ಟಿದ್ದಾರೆ. ಜೊತೆಗೆ ಅವರ ಪತ್ನಿ ಸಹೋದರಿ ಡಾ. ವಿನಯಾರವರೂ ಕೂಡಾ ಮನೆಯ ಸದಸ್ಯರಾಗಿದ್ದಾರೆ. ಅವರಿಬ್ಬರ ಆತ್ಮೀಯ ಸಿಟ್ಟೇ ಈ

ಕವನ ಸಂಕಲನ ಹೊರಬರಲಿಕ್ಕೆ ಕಾರಣವಾಗಿದೆ. ಅಲ್ಲದೇ ಬೆನ್ನುಡಿ ಬರೆದು ಪ್ರೋತ್ಸಾಹಿಸಿದ್ದಕ್ಕೆ ನನ್ನ ಅಭಿಮಾನದ ಕೃತಜ್ಞತೆಗಳು

ಬಂಡಾಯದ ಪ್ರೀತಿಯ ಗೆಳೆಯರಾದ ಮುಂಡರಗಿಯ ಬಿ. ಬಾಬು ಅವರಿಗೂ ಕೃತಜ್ಞತೆಗಳು.

ಡಾ ಸಿದ್ದನಗೌಡ ಪಾಟೀಲರು ಮನೆಗೆ ಬಂದಾಗೊಮ್ಮೆ ನನ್ನ ಬಗ್ಗೆ ಆತ್ಮೀಯವಾಗಿ ಮಾತನಾಡಿ ಬರೆಯುವಂತೆ ಪ್ರಚೋದನೆ ನೀಡಿ ಮುನ್ನುಡಿ ಬರೆದು ನನ್ನ ಕವನ ಸಂಕಲನದ ಮೌಲ್ಯ ಹೆಚ್ಚಿಸಿದ್ದಾರೆ

'ಲಡಾಯಿ' ಪತ್ರಿಕೆಯ ಸಂಪಾದಕ ಗೆಳೆಯ ಬಸವರಾಜ ಸೂಳಿಭಾವಿಯವರು ಎಲ್ಲಿಯೇ ಭೇಟಿಯಾಗಲಿ ''ಹೂಂ ಮತ್ತೇನು ಬರ್ದೀರಿ ? ಬರೀರಿ ಮಾರಾಯ್ರ ಒಂದು ಕವನ ಸಂಕಲನ ಹೊರಗ ತರೋಣ'' ಎಂದು ಹೇಳಿ ಹೇಳಿ ಸುಸ್ತಾಗಿದ್ದರು ಕೊನೆಗೆ ಒಕ್ಕುಂದ ಸರ್‌ಗೆ ಹೇಳಿ ನನ್ನ ಕವನಗಳನ್ನೆಲ್ಲ ತಾವಿಬ್ಬರೇ ತಿದ್ದಿ ಸೂಕ್ತ ಬದಲಾವಣೆಗಳನ್ನು ಮಾಡಿ ಡಿ.ಟಿ.ಪಿ., ಮುಖಪುಟಗಳನ್ನು ತಾವೇ ಓಡಾಡಿ ಮಾಡಿಸಿದರು ನನ್ನ ಶ್ರಮ ಇದರಲ್ಲಿ ಏನೂ ಇಲ್ಲ ಕವನ ಸಂಕಲನದ ಪೂರ್ಣ ಶ್ರೇಯಸ್ಸು ಈ ಇಬ್ಬರಿಗೂ ಸಲ್ಲಬೇಕು.

ಶಿರಹಟ್ಟಿ, ಮುಂಡರಗಿ, ಕುಂದಗೋಳ, ಗದಗ, ಕೊಪ್ಪಳ, ರಾಯಚೂರು, ಧಾರವಾಡ, ಹಾವೇರಿ ತಾಲೂಕುಗಳ ಪ್ರಗತಿಪರ ವಿಚಾರದ ಗೆಳೆಯರಿಗೆ ನೆನೆಕೆಗಳು

ನಾ ಬರೆದ ಕವನಗಳನ್ನು ಓದಿ ಸಂತೋಷಪಟ್ಟು ಪ್ರೋತ್ಸಾಹಿಸಿದ ಮಡದಿ ಸುವರ್ಣಳನ್ನು ಸ್ಮರಿಸದಿದ್ದರೆ ಹೇಗೆ ? ಮೂರು ಮುತ್ತುಗಳು ಅನು, ಪೂರ್ಣಿಮಾ, ಗೀತಾರನ್ನು ನೆನೆಯುತ್ತೇನೆ. ಅಂದವಾದ ಮುಖಪುಟ ವಿನ್ಯಾಸಗೊಳಿಸಿದ ಕಲಾವಿದ 'ಮಕಾಳಿ'ಯವರಿಗೆ ಹಾಗೂ ಇಲಾಖಾ ಅಧಿಕಾರಿಗಳು ಮತ್ತು ಶಿಕ್ಷಕ ಮಿತ್ರರಿಗೂ ನನ್ನ ಕೃತಜ್ಞತೆಗಳು.

ಇದು ನನ್ನ ಮೊದಲನೆ ಕವನ ಸಂಕಲನ ಸಹೃದಯಿ ಓದುಗರು ಓದಿ, ವಿಮರ್ಶಿಸಿ ತಮ್ಮ ಅನಿಸಿಕೆಗಳನ್ನು ತಿಳಿಸುತ್ತಾರೆಂದು ಆಶಿಸಿದ್ದೇನೆ.

ಶಿಕ್ಷಕರು
ಲಕ್ಷ್ಮೇಶ್ವರ-೫೮೨ ೧೧೬

**ಸಿ.ಜಿ. ಹಿರೇಮಠ**

# ಪ್ರಕಾಶಕರ ಮಾತು

ಕಾವ್ಯ, ಓದು, ಚರ್ಚೆ ಹಾಗೂ ಹೋರಾಟದ ಬದುಕಿನಲ್ಲಿ ಸದಾ ಜತೆಯಾಗಿರುವ ಗೆಳೆಯರ ಕವನ ಸಂಕಲನಗಳನ್ನು ಪ್ರಕಟಿಸುವ ಮೂಲಕ 'ಲಡಾಯಿ' ಪುಸ್ತಕ ಪ್ರಕಾಶನದ ಜಗತ್ತಿಗೆ ಕಾಲಿಟ್ಟಿದೆ

ಹೊಸ ಪೀಳಿಗೆಯ ಅಭಿವ್ಯಕ್ತಿಯ ವಿವಿಧ ಮುಖಗಳಿಗೆ ವೇದಿಕೆಯಾಗಬೇಕೆಂಬುದು ಲಡಾಯಿಯ ಹಂಬಲ. ಕಳೆದ ಮೂರು ವರ್ಷಗಳಿಂದ ಪತ್ರಿಕೆಯಾಗಿ ಉತ್ತರ ಕರ್ನಾಟಕದ ಜನಗಳ ದನಿಯಾಗಿರುವ 'ಲಡಾಯಿ' ಪುಸ್ತಕ ಪ್ರಕಾಶನಕ್ಕೂ ಕೈ ಹಾಕಿ ತನ್ನ ಅಭಿವ್ಯಕ್ತಿ ಆಯಾಮದ ಸಾಧ್ಯತೆಯನ್ನು ಹಿಗ್ಗಿಸಿಕೊಳ್ಳುವ ದಿಸೆಯತ್ತ ಹೆಜ್ಜೆ ಇಟ್ಟಿದೆ.

ತುಂಬ ಭಿನ್ನವಾದ ಕಾವ್ಯದ ನೆಲೆಗಳಿಂದ ಬದುಕನ್ನು ನೋಡುವ ಮತ್ತು ಸಮಕಾಲೀನ ಸಂದರ್ಭದ ಹೊಣೆ ಅರಿತು ಕಾವ್ಯ ರಚನೆಯಲ್ಲಿ ಗಂಭೀರವಾಗಿ ತೊಡಗಿಸಿಕೊಂಡಿರುವ ಗೆಳೆಯರ ನಾಲ್ಕು ಕವನ ಸಂಕಲನಗಳನ್ನು ಪ್ರಕಟಿಸುತ್ತಿದ್ದೇವೆ. ಬದ್ಧತೆ ಸೃಜನಶೀಲ ಮನಸಿನ ಮಿತಿಯಾಗದೆ ಸೃಜನಶೀಲ ಆಯಾಮದ ಪರದೆಯನ್ನು ವಿಸ್ತರಿಸಬಲ್ಲದು ಅನ್ನುವದಕ್ಕೆ ಈ ನಾಲ್ಕು ಕವನ ಸಂಕಲನಗಳು ಸಾಕ್ಷಿ ನುಡಿಯುತ್ತಿವೆ.

ಬದುಕಿನ ಅನೇಕ ಮಗ್ಗಲುಗಳನ್ನು ಪ್ರೀತಿ ಮತ್ತು ಸ್ತ್ರೀ ಸಂವೇದನೆಯ ನೆಲೆಯಲ್ಲಿ ನೋಡುವ ಡಾ. ವಿನಯಾ ಸಮಕಾಲೀನ ಹೊಸ ಬರಹಗಾರರಲ್ಲಿ ಗಮನಾರ್ಹ ಕವಿ ಮೊದಲ ಸಂಕಲನದ ಎಲ್ಲ ರಿಯಾಯಿತಿಗಳನ್ನು ನಿರಾಕರಿಸಿ ಸಹೃದಯನ ಆಳಕ್ಕಿಳಿಯುವ ಗಟ್ಟಿತನ ಅವರ 'ಬಾಯಾರಿಕೆ' ಕವನ ಸಂಕಲನಕ್ಕಿದೆ

ಗೆಳೆಯ ಎಂ ಡಿ. ಒಕ್ಕುಂದನಿಗೆ ಪ್ರೀತಿ ಕೇವಲ ಒಂದು ವಯಸಿನ ಹಳಹಳಿಕೆಯಲ್ಲ ಅದೊಂದು ಬದುಕಿನ ಮೂಲದ್ರವ್ಯ ಪ್ರೀತಿ ಮತ್ತು ವ್ಯಂಗ್ಯದ ನೆಲೆಯಲ್ಲಿ ಗ್ರಹಿಕೆಯ ತಾಜಾತನದಿಂದ ಸಮಾಜದ ದ್ವಂದ್ವಗಳನ್ನು ಎಚ್ಚರಿಕೆಯಿಂದ ಗಮನಿಸುವ ಕವಿ. 'ತುಳುಕು' ಈತನ ಕಾವ್ಯ ಸಾಮರ್ಥ್ಯದ ಕೈಗನ್ನಡಿ

ಡಾ. ಬಸವರಾಜ ಕುಂಬಾರ ಅವರು ಅಬ್ಬರದ ಶಬ್ದಾಡಂಬರಗಳಿಲ್ಲದೆ ಪರಿಣಾಮಕಾರಿ ಕವಿತೆ ಬರೆಯುವ ಕವಿ. ಬಂದೂಕಿನ ನಳಿಕೆಗಳಿಂದ ರಾಜ್ಯವಾಳುವ

ಪ್ರಭುತ್ವದಡಿಯಲ್ಲಿ ಜನಸಾಮಾನ್ಯರ ಪರ ಬಂಡಾಯದ ದನಿ ಎತ್ತುವ ಅವರ ತುಡಿತಗಳು 'ಬಂದೂಕಿನ ಮನುಷ್ಯರು' ಕೃತಿಯಲ್ಲಿ ಅಭಿವ್ಯಕ್ತಗೊಂಡಿವೆ.

ಸಿ. ಜಿ. ಹಿರೇಮಠರು ಅಪ್ಪಟ ಕವಿ ಮನಸಿನವರಾಗಿದ್ದರೂ ಬರೆದ ಕವಿತೆಗಳನ್ನೆಲ್ಲ ಟ್ರಂಕ್‌ಗಳ ತಳದಲ್ಲಿಟ್ಟಿದ್ದರು. ಅವುಗಳನ್ನು ಶೋಧಿಸಿ ಹೊರತೆಗೆದು ಪ್ರಕಟಿಸುತ್ತಿರುವ 'ಬಿಳಿ ಮುಗಿಲ ಕೆಳಗೆ' ಅವರ ಅಭಿವ್ಯಕ್ತಿಯ ಮಿತಿ ಮತ್ತು ಸಾಧ್ಯತೆಗಳಿಗೆ ತೆರೆದಗನ್ನಡಿಯಾಗಿದೆ

ಈ ನಾಲ್ವರು ಗೆಳೆಯರು ತಮ್ಮ ಕವನ ಸಂಕಲನಗಳನ್ನು ನಮ್ಮ ಪ್ರಕಾಶನದಿಂದ ಪ್ರಕಟಿಸಲು ಅವಕಾಶ ನೀಡಿದ್ದಾರೆ. ಅವರಿಗೆ ನಾನು ಋಣಿ.

ಪುಸ್ತಕ ಪ್ರಕಾಶನದಲ್ಲಿ ಇದು ನಮ್ಮ ಮೊದಲ ಪ್ರಯತ್ನ. ಓದುಗರು ಪತ್ರಿಕೆಯನ್ನು ಸ್ವಾಗತಿಸಿದಂತೆ ನಮ್ಮ ಪ್ರಕಾಶನದ ಈ ಪುಸ್ತಕಗಳನ್ನು ಅದೇ ಪ್ರೀತಿಯಿಂದ ಸ್ವಾಗತಿಸುವರೆಂದು ನಿರೀಕ್ಷಿಸುವೆ.

ಗದಗ ಬಸೂ

# ಪರಿವಿಡಿ

# ಬಸಪ್ಪನ ಮನ್ಯಾಗ ಅಲ್ಲಾ !

ಜಂಗಮರ ಶಿವಪುತ್ರ ಇಲ್ಲಿ ಅಲ್ಲಾನ ಭಕ್ತ
ಮರಾಠರ ಶಿವಾಜಿ ಆಲೇ ದೇವರ ಹೆಜ್ಜಿ ಮಾಸ್ತರ
ಬಡಿಗೇರ ಇರಪಾಕ್ಷಿ ಡೋಲಿ ಮಾಡ್ಯಾನ
ಯಾಕಂದ್ರ ದೇವರಿಗೆ ಅಂವ ಬೇಡಿಕೊಂಡಿರತಾನ

ಕತ್ತಲರಾತ್ರಿ ಅಂತ್ಹೇಳಿ ಕುರಬರ ಬಸಕ್ಕ ಉಪಾಸ ಮಾಡ್ಯಾಳ
ದೇವರು ಹೊಳಿಗೆ ಹೊಕ್ಕಾವಂತ ತಳವಾರ ದ್ಯಾಮವ್ವ ಹಬ್ಬ ಮಾಡ್ಯಾಳ
ಹೊಲ್ಯಾರ ದುರಗವ್ವ ದೇವರ ಮುಂದ ದಿಂಡರಕಿ ಉಳ್ಳತಾಳ
ಗಂಡನ ಮಯ್ಯಾಗ 'ಅಲ್ಲಾ' ಬಂದಾನಂತ ಹಡಪದ ಅಕ್ಕವ್ವ ಕೈ ಮುಗದಾಳ

ಊರಿಗೆ ಊರS ಅಲ್ಲಾಗ ಎಡಿ ಕೊಡತಾರ
ಎಡೀ  ಕೊಡಾಕ ಹ್ವಾದವರ ತಲೀಗೆ ಹುಸೇನಿ ನವಲಗರಿ ತಟ್ಟತಾನ
ಎಲ್ಲಾರ ಮನ್ಯಾಗ ಚೊಂಗೆ ಆಗ್ತಾವ
ಪಿಂಜಾರ ಫಕೃನ ಮನ್ಯಾಗ ಒಂದS ಪಂತ್ಯಾಗ ಊಟ ನಡೀತೈತಿ

ನಮಗ ಬಾಬರಿ ಅಂದ್ರ ಗೊತ್ತಿಲ್ಲ
ರಾಮ ಮಂದಿರ  ಎಲ್ಲೈತಿ ತಿಳಿದಿಲ್ಲ
ಫಕೀರನಾಬನ ಮನ್ಯಾಗ ಶಿವ-ರಾಮನ್ನ ಕಾಣ್ತಿವಿ
ಬಸಪ್ಪನ ಮನ್ಯಾಗ ಅಲ್ಲಾನ್ನ ಕಾಣ್ತಿವಿ

ಬರಬ್ಯಾಡ್ರಿ ನಮ್ಮ ಕಡೆ ನಿಮ್ಮ ಬಾಬರಿ-ರಾಮನ್ನ ತಗೊಂಡು
ಸ್ವಚ್ಛನ್ನ ಎದ್ಯಾಗ ಕಿಚ್ಚ ಹಚ್ಚಬ್ಯಾಡ್ರಿ

ನಮಗ ರಾಮನೂ ಅಷ್ಟಽ ಅಲ್ಲಾನೂ ಅಷ್ಟಽ
ಒಟ್ಟ ನಮಗ ಇಷ್ಟ ಗೊತ್ತು
ರಾಮನೂ ಭಾರತದವನ ಅಲ್ಲಾನೂ ಭಾರತದವನ

# ಬಿಳಿ ಮುಗಿಲ ಕೆಳಗೆ

ಬಿಳಿ ಮುಗಿಲ ಕೆಳಗೆ ನಮ್ಮೂರು
ಇದಕೆ ರಾತ್ರಿಯೆಂಬುದೇ ಇಲ್ಲ
ಇದ್ದರೂ ನಿದ್ದೆ ಇಲ್ಲ
ಇಲ್ಲಿ ಉಂಟು ಜನಗಳೆಂಬವರು
ಉಸಿರಾಡಲು ಶಕ್ತಿ ಇಲ್ಲ
ಜೀವಶಾಸ್ತ್ರಜ್ಞನಿಗೆ ಬಲು ಸರಳ
ಎಲುವುಗಳೆಣಿಸಲು
ಯಾವ ಮೈಕ್ರೋಸ್ಕೋಪೂ ಬೇಕಿಲ್ಲ

ಇಲ್ಲಿ ದನಗಳೆಂಬ ಪ್ರಾಣಿಗಳು
ಸುಡುಗಾಡಿನ ಎಲುಬಿನ ತುಂಡುಗಳು
ತಿರುಗುತಿಹವು ಅತ್ತಿಂದಿತ್ತ ಇತ್ತಿಂದತ್ತ

ಹಾಂ ! ಗಿಡಮರ ಬಳ್ಳಿಗಳು
ಎಣ್ಣೆಗಾಣದ ಬಡವಿಯ ಕೆದರಿದ ತಲೆ
ಅಲ್ಲೊಂದು ಇಲ್ಲೊಂದು
ಕೆರೆ ಹಳ್ಳ ಬಾವಿಗಳು
ಮುದುಕರ ಚರ್ಮ, ಹೆಣದ ವಾಸನೆ

ಹಕ್ಕಿ ಪಕ್ಷಿಗಳು ಕೂಗುತಿವೆ

ಅನಿವಾರ್ಯವೆಂಬಂತೆ
ಸೋತ ರೆಕ್ಕೆಗಳು
ಮೇಲೇಳಲಾರದೇ ಗಿಡದಲ್ಲೇ ನಿದ್ರೆ

# ಸ್ವಲ್ಪ ನಗ್ತಿಯಾ ?

ಗೆಳೆಯಾ
ನೀ ಯಾಕ ನಗೂದಿಲ್ಲ ?
ನಕ್ರ ಮುತ್ತು ರತ್ನ ಉದುರತಾವಂತ ತಿಳಿದೀಯೆನ ?
ಅವು ನಿನ್ನ ಬಾಯಾಗಿರೂದಿಲ್ಲ
ಸಮುದ್ರ್ರದ ತಳದಾಗದಾವು

ಗೊಬ್ರ ತಿಂದ ನೀರ ಕುಡದ ಗಿಡ ಮರಾ
ಹೂ ಬಿಟ್ಟು ಹೆಂಗ ನಗತಾವ ನೋಡು
ಧುಮ್ಮಿಕ್ಕೂ ಜಲಪಾತ ಹಾಲ ಉಕ್ಕಿದಂಗ
ಹಾರ್ರ್ಯಾರಿ ಬಿದ್ದ ಹ್ಯಾಂಗ ನಗತೈತಿ ನೋಡು
ನೀ ನಗಾಕ ಅಷ್ಟ್ಯಾಕ ಹೆದರ್ತಿ ?

ಅಧಿಕಾರ, ಹಣಾ ಇದ್ರ ನಗಬಾರದಂತ
ಎಲ್ಲಿ ಬರದೈತಿ ?
ತಾಯೀ ಹಾಲ ಕುಡೀ ಮುಂದ ನಕ್ಕಿದ್ದೆಲ್ಲ
ಆ ಮೀಸಲ ನಗೀ ಯಾರಿಗೆ ಮಾರಿಕೊಂಡಿ ?

ಒಮ್ಮೆ ತಲಿ ಎತ್ತಿ ನೋಡು
ಚಂದ್ರ ತಾ ನಕ್ಕದ್ದಲ್ಲನ&
ತನ್ನ ನಗೀ ಗಡಲಾಗ, ಭೂಮೀನ ಒಂದ ತೆಪ್ಪ ಮಾಡಿ
ತೇಲಸಾಕ ಹತ್ಯಾನ

ಗೆಳೆಯಾ,

ಈಗರ ಸ್ವಲ್ಪ ನಗ್ತಿಯಾ ?

# ಕದನದ ನಂತರ ಕಳವಳ

ಕಡಿಮೆಯಾಗಿದೆ ಅಬ್ಬರಿಸಿದ
ಗುಂಡುಗಳ ಸುರಿಮಳೆ
ಹೂತು ಹೋದವು ರುಂಡ ಮುಂಡಗಳು
ಹಿಮಾಲಯದಿ ಬೆಂಕಿ ಮಳೆ

ಹಿಮ ಬೆಟ್ಟಗಳ ತಪ್ಪಲಲ್ಲಿ
ತುಂಬಿ ಹರಿವ ನದಿಗಳಲ್ಲಿ
ಹರಿಯಿತು ರಕ್ತದ ಕಾಲುವೆ

ದಿಕ್ಕು ದಿಕ್ಕಿಗೆ ಹಾರಿ ಹೋಗಿ
ಭಯದಿ ನಡುಗುವ ಹಕ್ಕಿ ಪಕ್ಕಿ
ಮರಳಿ ಬರುವವೇ ? ಇಲ್ಲಿಗೆ ?

ಹದಿ ಹರಿಯದ ಹುಡುಗಿಯರ
ಹಸಿ ಕನಸಿನ ಬೆಡಗಿಯರ
ಪ್ರೇಮ ಪತ್ರಗಳು ಉತ್ತರ ಕಾಣಲಿಲ್ಲ

ಹೆಂಡತಿಯರ ಎದೆ ತುಂಬಿದ
ಬೆಚ್ಚಗಿನ ಮನಸುಗಳು
ಹಚ್ಚಗಿನ ಕನಸುಗಳು ಸತ್ತವಲ್ಲ

ಮುದಿ ತಂದೆ ತಾಯ್ಗಳ
ಕರುಳ ಬಳ್ಳಿಯ ಪ್ರೀತಿ
ಕಮರಿ ಹೋದದ್ದು ಗೊತ್ತಾಗಲೇ ಇಲ್ಲ

ಹೆಣದ ಮುಂದೆ 'ಅಪ್ಪಾ' ಎಂದು
ಕರೆವ ಬಾಯ್ಗಳಿಗೇನುತ್ತರ ?
ಗುಂಡು ಫಿರಂಗಿಗಳು
ಹೇಳ ಬಲ್ಲವೆ ಉತ್ತರ ?
ಅನುಕಂಪ ಭಾವುಕತೆ
ಕಾಲನಡಿ ಹೂತು
ತೇಲುತಿವೆ ನಿಮ್ಮ ನೆಗಳು

## ಈ ಸಲದ ಬರಗಾಲ

ವರ್ಷಾ ಈ ದಿನದಾಗ
ಕುಂತ ಕುಂಡೀ ಕೆರಕೊಳ್ಳಾಕ
ಪುರಸೊತ್ತಿರೂದಿಲ್ಲ
ನಸಿಕನ್ಯಾಗ
ಪಟ ಪಟಾ ರೊಟ್ಟಿ ಸಪ್ಪಳ
ಎತ್ತು ತಿನ್ನೋ ಮೇವಿನ ಸರಬರ ಸಪ್ಪಳ
''ಬಸ್ಯಾ ಏಳೋ ಕಲ್ಯಾ ಬಾರೋ
ನಿಂಗೀ ನೀರ ತಾರ, ತಂಗೀ ನೀ ಬಾರ'' ಅಂತಾ
ವಟಗುಡುವ ಮುದುಕ ಈ ಸಲ
ಹೊತ್ತೇರಿದರೂ ಇನ್ನೂ ಮಲಗ್ಯಾನ



ಬೆಲ್ಲದ ಚಾ ಕುಡದ ಬಸ್ಯಾ ನಿಂಗ್ಯಾ
ತಂಬಾಕ ಉಗಳಕೊಂತ ಕಟ್ಟೀ ಹಿಡದಾರ
ಕಂಬಾರ ಇರಪ್ಯಾ ತಿದೀ ಮುಂದ ಚುಟ್ಟಾ ಹಚ್ಯಾನ
ಬಡಿಗ್ಯಾರ ಕಾಳ್ಯಾ ಮಗಗ ಚಿಣಿಪಣಿ ಕೆತ್ಯಾನ

ಮೈಮ್ಯಾಲ ಕೆಂಡ ಸುರುಕೊಂಡ
ಸೂರ್ಯಾ ಬೇಸಿಗೊಳ್ಳಾಕತ್ತ್ಯಾನ
ಮಳೀ ದಾರಿ ಕಾಯ್ತಾ ಇರೋ
ಮಂದಿ ಮಾರಿ
ಸುಟ್ಟ ಬದನಿಕಾಯಿ !

ಬಿತ್ತಾಕ ಬೀಜ ತಯಾರ ಮಾಡಿ ತಿಂಗಳಾತು
ಹುಳಾ ಹತ್ತಿ ಹೋದಾವಂತ

ಸಾರ ಮಾಡಿ ಹೊಡ್ಯಾಕ್ಹತ್ಯಾರ
ದನ ಕರಕ್ಕ ಕುಡ್ಯಾಕ ನೀರಿಲ್ಲ
ಹೊಟ್ಟಿಗೆ ಮೇವಿಲ್ಲ
ಒಂದು ದಿನದ ಮೇವ ನಾಕ ದಿನಾ ತಿಂದ
ಡೊಕ್ಕ್ಯಾಗ ಡೊಕ್ಕಿ ಸೇರಿ
ನೆಲಾ ಮೂಸಗೊಂತ 'ಅಂಬಾ' ಅಂತಾವು.
ಬುತ್ತಿ ಕೊಡಾಕ ಹೋಗು ಕಾಟ ಇಲ್ಲ
ಸಾಲಿ ತುಂಬ ಮಕ್ಕಳು ಭರ್ತಿ ಆದಾರ
ತಮ್ಮ ಕಾಲದಾಗ ನಾಲ್ಯಾಗಿನ ಮಕ್ಕಳ ಸಂಖ್ಯಾ
ಹೆಚ್ಚಾತ್ತಂತ 'ಆಳಾವು,' ಬೆನ್ನ ಚಪ್ಪರಿಸಿಕೊಂಡಾರ

# ಕೋಪ

ಇಕೀಗ ಬಂದಿತ್ತು ಕೋಪ
ಉರೀತಿತ್ತು ಕಣ್ಣಾಗ ಚಿಮಣಿ ದೀಪ
ಆಗ್ಗೈತಿ ಮಾರಿ ಮೆಣಸಿನ ಹಿಂಡಿ
ಮುಂದ ಹ್ವಾದರ ಅದರ್ದಽ ಘಾಟ

ಮಾಡ್ಯಾಳ ರೊಟ್ಟಿ ಹರಕ ಮುರಕ
ಪಲ್ಲೇ ಆಗ್ಗೈತಿ ಅಳಕಬಳಕ
ಮಾರ ದೂರ ನಿತಗೊಂಡು
ಧೈರ್ಯಾ ಮಾಡಿ ಕೇಳಿದೆ
''ಹಿಂಗ್ಯಾಕಂತ'' ?
ಭರ್ ಅಂತ ಬಂತು 'ನಾ ಹಿಂಗಽ ಅಂತ'

ದಿಟ್ಟಿಸಿ ನೋಡಿದ್ಯಾ
ಚಿಮಣಿ ದೀಪದಾಗ ಉರೀತಿತ್ತು
ನೀಲಾಂಜನದಂಥಾ ಪ್ರೀತಿ-ದೀಪ !

## ನಾ ಏರಿದ ಕುದರಿ

ಏರೀನಿ ನಾ ಒಂದ ಕುದರಿ
ಅಂತಿಂಥ ಕುದುರೆಲ್ಲ
ತಿಂತಿಂದು ಹೂಂಕರಿಸುವ ಕುದುರಿ
ಕಾಲಲ್ಲಿ ಚಿಗರಿ ಓಟ
ಸವಾರನ್ನ ನುಗ್ಗು ಮಾಡೋ ನಡ
ದಾರಿ ಸವೆದಿದ್ದರೂ ಸವೆಸುವ
ಗುರಿ ಮುಟ್ಟುವ ಛಲ
ಲಗಾಮು ಹಿಡಿತ ತಪ್ಪಿ
ಮುಗ್ಗರಿಸಿದರೆ
ಮತ್ತೆ ಏರುವ ಹುರುಪು
ಒಮ್ಮೆ ಅದರ ಸೋಲು
ಒಮ್ಮೆ ನನ್ನ ಗೆಲವು
ಸೋಲು ಗೆಲುವು ಸಮ್ಮಿಲತ ದಾರಿ
ಎಂದೂ ಮುಗಿಯದ ದಾರಿ

# ಬೀಜ ಉದರ್ರೈತಿ

ಹೊಲ ಹರಗಿ
ರಂಟೀ ಕುಂಟೀ ಹೊಡದ
ನನ್ನ ಗೆಳ್ಯಾಗ ಕೇಳಿದೆ
''ಯಾಕೋ ತಮ್ಮ ಬಿತ್ತುದಿಲ್ಲನ ?''
'ಎರಡ ವರ್ಷ ಬರೀ ರಂಟಿ ಹೊಡಿತೀನಿ' ಅಂದಿದ್ದ
ಆರ ತಿಂಗಳ ಬಿಟ್ಟ ನೋಡಿದರ
ಗೆಳ್ಯಾನ ಹೊಲದಾಗ ತೆನಿ ತುಂಬಿದ ಪೈರು !
ಗೆಳೆಯಾ ಹೇಳಿದ
''ಏನ ಮಾಡೂದಪಾ
ಬಿತ್ತಬಾರದಂತ ಎಷ್ಟ ಪ್ರಯತ್ನ ಮಾಡಿದ್ರೂ
ಬೀಜ ಉದಿರೇ ಬಿಟ್ಟೈತಿ'' ಅಂದಾ

# ನಿಸರ್ಗ

ಮರವನಪ್ಪಿ ಬೆಳೆವ ಬಳ್ಳಿ
ಬಳ್ಳಿ ತುಂಬ ಹೂವು ಕಾಯಿ
ಮರಕೆ ಇಲ್ಲ ಹೊಟ್ಟೆ ಕಿಚ್ಚು
ಬೆಳೆಯಲಿಂಬು ಕೊಡುವದು

ಧುಮ್ಮಿಕ್ಕಿ ಹರಿವ ನೀರು
ಕಲ್ಲು ಬಂಡೆಗಪ್ಪಳಿಸಿದರೆ
ತಾನು ನಕ್ಕು ಪ್ರೀತಿಯಿಂದ
ನೀರನುಕ್ಕಿಸುತಿಹುದು

ಮನುಷ್ಯ ?

# ನಮ್ಮ ಮರದ ಹೂವು

ನಮ್ಮ ಮನೆಯ ಹಿತ್ತಲಲ್ಲಿ
ಬೆಳೆದು ನಿಂತ ಹೂಮರ
ಟೊಂಗೆ ಟೊಂಗೆಗೂ  ಹೂಗೊಂಚಲ
ದಿಕ್ಕು ದಿಕ್ಕಿಗೆ ಸೌರಭ

ಊರ ಜನರು ಮೂಸಲಿಲ್ಲ
ಕೈ ಮುಂದೆ ಚಾಚಲಿಲ್ಲ
ಕೀಳಲಿಲ್ಲ ಮುಡಿಯಲಿಲ್ಲ
ಕಚ್ಚಾಡಿದರು ಅನುದಿನ

ಸುತ್ತ ಮುತ್ತಲೂರಿನವರು
ಬಂದು ನಿಂತು ನೋಡಲು
ಹೂವಿನಾಶೆ ಹೆಚ್ಚಲು

ದಿನವೂ ಒಂದು ಹೂವ ಕಿತ್ತು
ನಮ್ಮ ಹೂವ ನಮಗೆ ಮಾರಿ
ಗಿಡದ ಒಡೆಯರಾದರು
ನಮ್ಮ ಬೆನ್ನ ತುಳಿದರು

# ನಾಟಕ ಕಂಪನಿ

ಇಂಡಿಯಾ ಅನ್ನೂ ದೇಶದಾಗ
ವೇಷಗಾರರು ಬಂದಾರ
ಬಂದಾರಂದ್ರ ಈಗಲ್ಲ
ಯಾವಾಗ್ಲೂ ಆದಾರ
ಮೂಲಿ ಮೂಲಿಗೆ ಕುಡೀ  ಚಾಬ್ಯಾರ
ಬಣ್ಣ ಬದಲಾಯಿಸೂದ್ರಾಗ ಬಾಳಾ ಪಳಗ್ಯಾರ

ಕಂಪನಿ ಪಾತ್ರಧಾರಿಗಳು
ಬಾಳಾ ನಾಚಾ ಮಂದಿ
ಯಾರರ ನಾಟಕ ಹಿಡೀಲಿ
ರೊಕ್ಕ ಬಂದ್ರ ನಾಕ್ದಂತೇಳಿ
ತಮ್ಮ ತಮ್ಮ ಪಾತ್ರದ
ಹಾವ ಭಾವದ
ತಾಲೀಮ ನಡಿಸ್ಯಾರ

# ಕವಿ ಮಾಡಿದ ಮೋಸ

ನಿನ್ನ ಮುಖ ಬೆಳದಿಂಗಳು
ಕಣ್ಣು ಮೀನ, ಕಮಲ
ನೀನು ಲತೆ, ಪುಷ್ಪ - ಎಂದೆಲ್ಲಾ
ಕವಿ ವರ್ಣಿಸುವಾಗ
ಮಾತಿನ ಜಾಣ್ಮೆಗೆ ಸೋತು
ನೀ ಪುಷ್ಪವಾದೆ
ಅವನು ಜೇನಾಗಿ ಒಳಹೊಕ್ಕು
ಮಕರಂದ ಹೀರಿ
'ಜಾರಿಣಿ' 'ಸೂಳೆ'
ಪಟ್ಟ ಕಟ್ಟಿದ

## ಆಶೆ

ನಿನ್ನ ಸುತ್ತಲೂ ಕಾಣದಂತೆ
ತಂಗಾಳಿಯಾಗಿ ಸುಳಿವಾಶೆ

ವಿರಹ ಮನದಿಂದ
ನೀ ಬರೆವ ಕವನವಾಗುವಾಶೆ

ನಿನ್ನ ಮೈ ತುಂಬ
ರಕ್ತವಾಗಿ ಹರಿದಾಡುವಾಶೆ

ನೀ ಬೆರಳಾಡಿಸುವ
ಅಮೂಲ್ಯ ವೀಣೆಯಾಗುವಾಶೆ

ನಿನ್ನ ಹಾಡುರಾಗಗಳಿಗೆ
ಇಂಪಾದ ಕಂಠವಾಗುವಾಶೆ

ಮಂಗಲ ಸೂತ್ರವಾಗಿ
ಸದಾ ನಿನ್ನ ಎದೆಯ ಮೇಲಿರುವಾಶೆ

# ಕವಿ ಸತಿಯ ಕವಿತೆ

ನನ್ನ ಕವನಗಳು
ಮೊದಲು ಬೀಳುವದು
ಇವಳ ಕಿವಿಯ ಮೇಲೆ
ಆಸಕ್ತಿಯಿಂದ 'ಹೂಂ' ಗುಡುವಳೋ
ಇಲ್ಲಾ 'ಪೀಡೆ' ಓದಲಿ ಬಿಡು
ಎನ್ನುವಳೋ ಗೊತ್ತಿಲ್ಲ
ನಾನೂ ಓದುವದು ಬಿಟ್ಟಿಲ್ಲ
ಹೀಗೆಯೇ ಇಪ್ಪತ್ತು ವರ್ಷಗಳು
ಕಳೆದು ಹೋದವು
ಮೊನ್ನೆ ಅಕಸ್ಮಾತ್
ನನ್ನ ಮುಂದೆ ನಗುತ್ತ ನಿಂತಳು
ಕೈಯಲ್ಲಿ ತುಂಡು ಹಾಳಿ, ಪೆನ್ನು
ಬಲು ಹಿಗ್ಗಿನಿಂದ
''ಕವನ ಬರೆದು ಕೊಡಲೆ'' ಎಂದೆ
ಅಷ್ಟೆ ಶಾಂತವಾಗಿ
''ಇಲ್ಲ ನಾನೂ ಒಂದು ಕವನ
ಬರದಿರುವೆ ಓದುತ್ತೇನೆ'' ಎಂದಾಗ
ಒಮ್ಮೆಲೆ ಓಡಿನಾದಲ್ಲಿಯ
ಬಿರುಗಾಳಿ ತಲೆಯಲ್ಲಿ ಹೊಕ್ಕಂತಾಗಿ ಜೋಲಿ ಹೊಡೆದು
''ಓದು'' ಎಂದೆ
''ಓ ದೇವರೆ ಮುಂದಿನ ಜನ್ಮ
ಒಂದಿರುವುದಾದರೆ
ಕೊಡದಿರು ಕಪಿ ಗಂಡನನ್ನ

ಹೋದ ಜನ್ಮದ ಪಾಪವೋ ಏನೋ
ಪಡೆದಿರುವೆ ಕವಿ ಗಂಡನನ್ನ
ಕವನ ಓದಿ ಓದಿ
ಚಿತ್ರ ಹಿಂಸೆ ಮಾಡಿ
ಕೊಲ್ಲುವದಕ್ಕಿಂತ ಮುಂಚೆ
ಓ ದೇವರೆ ! ಕರೆದುಕೋ ನಿನ್ನ ಪಾದಕೆ''

ನೀರು ಮುಖದ ಮೇಲೆ ಬಿದ್ದಾಗ ಗೊತ್ತಾಯ್ತು
ಮೂರ್ಛೆ ಹೋಗಿದ್ದೇನೆಂದು

# ಸರಸೋತಿ ಪೂಜಾ

ಸಾಯನ್ಸ ಕಲಿಸೋ ಸೋಡಾ ಬಾಟ್ಲಿ ಚಾಳೀಸ ಮಾಸ್ತರ
ಹೆಡ್ ಮಾಸ್ತರ ಹೊರಡಿಸಿದ ನೋಟೀಸ್ ಓದಿ ಹೇಳಿದ
''ನಾಳೆ ಸರಸೋತಿ ಪೂಜಾ ಎಲ್ಲಾ ವಿದ್ಯಾರ್ಥಿ ವಿದ್ಯಾರ್ಥಿನಿಯರು
ಹದಿನೈದು ರೂಪಾಯಿ ತರಬೇಕು''

ಶಾಲೆಯಲ್ಲಿಲ್ಲ ವಿಜ್ಞಾನ ಗಣೀತದ ಪಾಠೋಪಕರಣ
ಭೂಗೋಳ ಹೇಳುವ ಮಾಸ್ತರಿಗಿಲ್ಲ ಒಂದ ಗ್ಲೋಬ್, ನಕಾಶ
ಇತಿಹಾಸಕ್ಕಿಲ್ಲ ಒಂದು ಭಾವ ಚಿತ್ರ
ಕನ್ನಡವು ಕಂಡಿಲ್ಲ ತನ್ನ ತನದ ನಕ್ಷೆ
ಸಂಗೀತ ವೇಳಾ ಪತ್ರಿಕೆಯಲ್ಲಿದೆ
ಕಲೆಯೂ ಅಷ್ಟೇ.

ಗಣೀತದ ಮಾಸ್ತರು 'ಲೆಕ್ಕ'ದಾಗ ಬಾಳಾ ಶ್ಯಾಣ್ಯಾ
ಹಿಂಗಾಗಿ ಪೂಜಾದ ಲೆಕ್ಕಪತ್ರ ಭಾರಾ ಹೊತ್ತ
ಕಾರ್ಡ ಪ್ರಿಂಟಿಗೆ ಐದನೂರು, ಕಾಯಿ, ಕರ್ಪೂರ್ಕ್ ಎರಡ ನೂರು
ಅತಿಥಿಗಳ ಸತ್ಕಾರಕ್ಕ ಮುನ್ನೂರು ಬರದ
ಟಿಫನ್ನಿಗೆ ಒಂದ್ಽ ಸಾವಿರ ಸಾಕೆಂದ.

ಪ್ರಾರ್ಥನಾ ಮಂದಿರದಾಗ ಸರಸೋತಿ ಪೂಜಾ ಸಾಗಿತು
''ವಿದ್ಯೆ ಕೊಡು ತಾಯೇ ಶಾರದಾಂಬೆ''
ನಿದ್ದೆಯಲಿ ಹಾಡಿತು ಮಕ್ಕಳ ಗುಂಪು

ಸಂಗೀತದ ಜ್ಞಾನ ಇರದಿದ್ದರೂ ಕನ್ನಡ ಮಾಸ್ತರ
ಸರಸೋತಿ ಹಾಡ ಹೇಳಿದ

ಹೆಡ್ ಮಾಸ್ತರ ಸ್ವಾಗತ ಮಾಡಿದ
ಅತಿಥಿ ಮಂಡಲ ಪ್ರಧಾನ ಭಾಷಣ ಸುರು ಮಾಡಿದ
''ಮಕ್ಕಳೇ ! ಓದ ಬ್ಯಾಡ್ರಿ ಬರೀಬ್ಯಾಡ್ರಿ
ಮಾಸ್ತರ ಕಲಸಲಿಕ್ಕೂ ಹೆದರಬ್ಯಾಡ್ರಿ
ಭಯ ಭಕ್ತಿಯಿಂದ ನರಸೋತಿ ಪೂಜಾ ಮಾಡ್ರಿ
ನಿಮಗ ಆಕಿ ಒಲೀತಾಳ
ಪರೀಕ್ಷದಾಗ ಪಾಸ ಮಾಡತಾಳ
ಉದಾಹರಣೆಗೆ ನನ್ನs ತೊಗೊಳ್ರಿ
ಓದ್ಲಿಲ್ಲ ಬರೀಲಿಲ್ಲ
ನನ್ನ ಕಡೀಂದ ಬಡಿಸಿಕೊಳ್ಳದ ಮಾಸ್ತರು
ಇಲ್ಲಿ ಯಾರೂ ಇಲ್ಲ
ಹಿಂಗಾಗಿ ಇವತ್ತ ನಾ ಮಂಡಳ ಪ್ರಧಾನ ಆಗೀನಿ
ಯಾಕಂದ್ರ ಸಣ್ಣಾಂವ ಇದ್ದಾಗ
ಭಯ-ಭಕ್ತಿಯಿಂದ ನರಸೋತಿ ಪೂಜಾ ಮಾಡಿದ್ದ್ಯಾ''

'ಹೆಡ್' ಮಾಸ್ತರ್ ಜೋರಾಗಿ ಚಪ್ಪಾಳಿ ತಟ್ಟಿದರು
ಮಕ್ಕಳು ನರಸೋತಿ ಕಿವಿ ಹರಿಯುವಂಗ ಚಪ್ಪಾಳಿ ಹೊಡದ್ರು
ನಾಲಿ ಪ್ರಧಾನ ಮಂತ್ರಿ ಕಡೇಮನಿ ಶಂಕ್ರ
''ಎಲ್ಲಾರು ಅವಲಕ್ಕಿ ಚಾ ಕುಡದ ಹೋಗಬೇಕು'' ಅಂತ್ಹೇಳಿ
ಆ'ಭಾರ' ಮನ್ನಿಸಿದ

# ಕವಿ

ಎಲ್ಲಾರೂ ಕವೀ ಆಗಾಕ ಹೊಂಟ್ರ
ಶಬ್ದಗಳ ಗತಿ ಏನು ?
ಮಂಗ್ಯಾನ ಕೈಯಾಗ ಮಾಣಿಕ್ಯ ಕೊಟ್ಟಂಗ
ಶಬ್ದಾನ ಎಲ್ಲಿಬೇಕಲ್ಲಿ ನೇರಸ್ತಾರ
ನಿಂತ ಬಲ ಬಲ ಉಚ್ಚೀ ಹೋದಂಗ
ಹಾಳೀ ಮ್ಯಾಲ ಅಕ್ಷರ ಚಲ್ಲತಾವು

ಕವಿ ಆಗಬೇಕಂತ ಮುಂಜಾನಿಂದ ನಂಜೀತನಕ
ತಿನಿಕಿ ತಿನಿಕಿ ಹುಡುಗ್ರು ಹೇತಂಗ
ಇಟೀಟ ಇಟೀಟ ಬರದ
ಹೊಳ್ಳಾಳಿ ಮಳ್ಳಾ ಓದಿ ಶ್ಯಾಣ್ಯಾನಂಗ
ಎದೀ ನಿಗರಸ್ತಾವು

## ಕವಿತಾ

ಬೆಳಕಿನ್ಯಾಗ
ಕವಿತಾ ಓದೋರು
ಬಾಳಾ ಮಂದಿ
ಕೇಳೋರೂ ಬಾಳಾ ಮಂದಿ
ಆದ್ರ
ನಂದು
ಕತ್ತಲಿನ ಕವಿತಾ
ಕೇಳಾಕ
ಕಿವಿ ಇದ್ದವ್ರು
ನಾಕಮಂದಿ
ನಾಕ

# ಸಾಲಿ ಮಾಸ್ತರ

ಮಕ್ಕಳಿಗೆ ನಾಕ ಅಕ್ಷರ ಕಲಿಸಬೇಕಂತ
ಸಾಲೀ ಮಾಸ್ತರಾದೆ
ಇನ್ನೂ ಹುಡುಗ್ರ ಪರಿಚಯ ಆಗಿರಲಿಲ್ಲ
'ಆರೋಗ್ಯ ತರಬೇತಿ'ಗೆ ಬಾ ಅಂದ್ರು
ಹೋದೆ
ತರಬೇತಿ ಕೊಡಾಂವ ಮುಂಜಾನೆ ಹತ್ತು ಗಂಟೆಗೆ ಎದ್ದು
(ಏನ ತಿಂದ ಮಲಗಿದ್ನೋ ಪುಣ್ಯಾತ್ಮ)
ಚಾ ಕುಡದು ಅರ್ಧ ಪ್ಯಾಕ ಸಿಗರೇಟ ಸೇದಿ
ಬರೂದ್ರಾಗ ಸೂರ್ಯ ನೆತ್ತಿ ಮ್ಯಾಲ ಬಂದಿದ್ದ
ಬಂದವ್ನ ''ಊಟಕ್ಕ ಹೋಗಿ ಬರ್ರಿ'' ಅಂದ
ಹೊಳ್ಳಿ ಬಂದಾಗ ಚಾ ಕುಡಿಸಿ
''ನೀವೆಲ್ಲ ಶಿಕ್ಷಕರು ಅದೀರಿ, ಆರೋಗ್ಯದ ಬಗ್ಗೆ ಎಲ್ಲ ತಿಳಿದಿರತ್ತೈತಿ
ನೀವಿನ್ನು ಹೋಗಬಹುದು'' ಅಂದ

ಮಾರನೇ ದಿನ ಸಾಲಿಗೆ ಹೋದಾಗ
ದನಗಣತಿ ಆದೇಶ ದಾರೀ ಕಾಯಾಕತ್ತಿತ್ತು
ನಲವತ್ತು ದಿನ ಊರಾಗಿನ ದನ, ಕತ್ತಿ, ಕುದುರಿ,
ಕೋಳಿ, ಹಂದಿ ಅಂತ ಎಣಿಸಿಗೊಂತ ನಾಯಿಯಂಗ ತಿರಿಗಿದ್ಯಾ

ಎಣಿಕಿ ಕೊಟ್ಟು ಬರಾಕ ಕಚೇರಿಗೆ ಹೋದಾಗ
ಪ್ರಧಾನ ಗುರುಗಳು ಸಿಕ್ರು
''ನಿಮ್ಮನ್ನ ಚುನಾವಣಿ ಡ್ಯೂಟಿಗೆ ಹಾಕ್ಯಾರ'' ಅಂದ್ರು
ಚುನಾವಣೆ ಮುಗಿಸಿಕೊಂಡು ಬಂದು
ಕ್ಲಾಸಿನ ಮಕ್ಕಳ ಹಾಜರಿ ಅರ್ಧ ಓದಿರಬೇಕು

ಪ್ರಧಾನ ಗುರುಗಳು ಬಂದು
''ನಿಮ್ಮನ್ನ ಮನಿ ಎಣಿಕೆಗೆ ನೇಮುಣಿಕೆ ಮಾಡ್ಯಾರ
ಆದೇಶ ಬಂದೈತಿ ತೋಗೋರ್ರಿ'' ಅಂದ್ರು
ಕಣ್ಣ ಕೆಂಪಗ ಮಾಡಿಕೊಂಡು
ಮನಿ ಎಣಿಕೆಗೆ ಹ್ವಾದೆ
ಮುಗಿಸಿಗೊಂಡು ಸಾಲೀಗೆ ಹೋಗಬೇಕನ್ನುದ್ರಾಗ
ವಾಲಿಕಾರ ಬಂದು ಜನಗಣತಿ ಆದೇಶ ಕೊಟ್ಟ

ದೇಶದ ಕೆಲಸ ಅಂತ ಒಪ್ಪಿಗೊಂಡು
ತಲೀ ಕೆಡಿಸಿಕೊಂಡು
ತಲಿ ಎಣಿಸಿಕೊಟ್ಟೆ

ಇನ್ನೇನ ಇಂವ ಸಾಲಿ ಕಲಿಸೇ ಬಿಡ್ತಾನಂತ
ನಮ್ಮ ಪುಢಾರಿಗಳಿಗೆ ಅನಿಸ್ತೋ ಏನೋ
ವಿಧಾನ ಸೌಧ, ಜಿಲ್ಲಾ ಪರಿಷತ್ತು ಮಂಡಲ್ ಪಂಚಾಯ್ತಿ ಅಂತ್ಹೇಳಿ
ಎಲ್ಲಾ ಚುನಾವಣೆ ಒಮ್ಮೆಗೆ ಘೋಷನೆ ಮಾಡಿದ್ರು
ಎಲ್ಲಾ ಮುಗ್ಸಿ 'ಇಂದು ಮಕ್ಕಳಿಗೆ ವಾಠ ಹೇಳಿಯೇ ತಿರುತ್ತೇನೆ'
ಅಂತಾ ಪ್ರತಿಜ್ಞೆ ಮಾಡಿ ಸಾಲಿಗೆ ಹೋದೆ
ನಮ್ಮ ಅಪ್ಪ ಬಂದ ಕುಂತಿದ್ದ
''ಈಗ್ಯಾಕವ ಅಂದೆ''
''ಎಂಟ ದಿನ ರಜಾ ಹಾಕು, ಕನ್ಯ ನೋಡೀವಿ
ಮದುವಿ ಮಾಡಿಕೊಂಡಽ ಬಂದ ಬಿಡು'' ಅಂದ
ಕನ್ಯಾ ಅನ್ನೂ ಶಬ್ದಾ ಕೇಳಿ
ಮೈಯಾಗಿನ ಕೂದ್ಲ ನೆಟ್ಟಗಾಗಿ
''ಅಯ್ಯೋ ನನ್ನ ಶಾಲಾ ಮಕ್ಕಳೇ'' ಎನ್ನುತ್ತ
ರಜಾ ಗೀಚಿದೆ

ಕನ್ಯಾಳ ತಂದೀ ಕೇಳಿದ
''ಹುಡುಗ ಏನ ಮಾಡ್ತಾನ್ರಿ ?''
''ನೋಡ್ರಿ ಯಜಮಾನ್ರ ನೌಕರಿಗೆ ಸೇರಿದ್ದು ಮಾಸ್ತರಂತ
ಆದ್ರ ಇನ್ನೂ ಮಾಸ್ತರ್ಕಿ ಮಾಡಿಲ್ಲ'' ಅಂದೆ
ಅದಕ ಅಂವಾ ಅಂದಾ
''ಬೇಸ್ಯಾತ ಬಿಡು, ಒಬ್ಬಽ ಇದ್ದಾಗ ಕಲಸಲಿಲ್ಲ
ಇನ್ನ ಲಗ್ನ ಆಗಿಂದ ಏನ್ ಕಲಿಸ್ತಿ ?''

ಲಗ್ನ ಆತು ಅಂದ ಮ್ಯಾಲ ಮಕ್ಕಳು ಆಗSಬೇಕಲ್ಲ
ಹೆಂಡ್ತಿ ಚಾಕ್ರಿ, ಮಕ್ಕಳ ಚಾಕ್ರಿ ಮಾಡಿಕೊಂತ
ಒಂದಿಷ್ಟು ಹೊಲಾನೂ ಮಾಡೀನಿ
ಊರ ಹಿರೇತನ
ಮಾಡುದ್ರ್ಯಾಗ ಸಾಲಿಗೆ ಹೋಗಾಕ ವ್ಯಾಳ್ಯಾನ ಸಿಗವಲ್ದು
ಮೂವತ್ತ ವರ್ಷಾತು ಯಾರೂ ನನ್ನ ಮಾಸ್ತರಂತ
ತಿಳಕೊಂಡೇ ಇಲ್ಲ
ಅಷ್ಟS ಯಾಕ,
ನಾನೂS ಹಂಗೆಲ್ಲ ತಪ್ಪ ತಿಳಕೊಂಡಿಲ್ಲ

## ಹನಿಗವನಗಳು

### ಒಕ್ಕಲಿಗ

ಹೊತ್ತು ಏರುವ ಮುನ್ನ ಎದ್ದು
ಸಂಜೇತನಕ ಎದ್ದು ಬಿದ್ದು
ಬೆವರು ಸುರಿಸಿ ದುಡಿದು
ಮುಂಬರುವ
ಫಲ ಕಲ್ಪಿಸಿ ಸಂತೋಷ ಪಡುವ
ಹವಾ ತುಂಬಿದ ಬಲೂನು

### ಮಾಸ್ತರ

ತನಗೆ ತಿಳಿದಷ್ಟು ಕಲಿಸಿ
ಇದ್ದ ಪಗಾರವನ್ನೆ
ಪದೇ ಪದೇ ಕೂಡಿಸಿಕಳೆದು
ವಿಚಿತ್ರ ತೃಪ್ತಿ ಪಡುವ
ಭಾವನಾ ಜೀವಿ

## ರಾಜಕಾರಣಿ

ಆರಿಸಿ ಬರುವಾಗ ಕಾಲಿಗೆ ಬಿದ್ದು
ಆರಿಸಿ ಬಂದಮ್ಯಾಲ ಕುಂಡಿಗೆ ಒದ್ದು
ಅಟ್ಟಹಾಸದಿಂದ ನಗುವ ರಾಕ್ಷಸ

## ರಾಜಕಾರಣ

ದೇಶಕ್ಕೆ ಸ್ವಾತಂತ್ರ್ಯ ಕೊಡಿಸಿ
ಹುತಾತ್ಮವಾಯಿತು ಅಂದಿನ ರಾಜಕಾರಣ
ಮತ್ತ ಸ್ವಾತಂತ್ರ ಕಳದು ದೇಶಾನ
ಪಾತಾಳಕ್ಕ ಒತ್ತಾಕತ್ತೇತಿ ಇಂದಿನ ರಾಜಕಾರಣ

## ಪುಣ್ಯ

ನಮ್ಮಜ್ಜ ಜೀವದಿಂದಿದ್ದಾಗ
ಕೂಳು ನೀರು  ಕೊಡದ ನಾವು
ಸತ್ತಾಗ ಅವನ ಬಾಯಾಗ
ನೀರು ಬಿಟ್ಟು
'ಪುಣ್ಯ' ಕಟ್ಟಿಕೊಂಡೆವು

## ಸೆಳಕು

ನಿನ್ನ ಸಿಟ್ಟಿನ ಮುಖವು
ಮೋಡ ಕವಿದ ಭಾನು
ಅಲ್ಲಿ ಅಕಸ್ಮಾತ್
ನಗು ಮೂಡಿದರೆ
ಮಿಂಚಿನ ಸೆಳಕು
ಝಳಪಿಸಿದಂತೆ

## ಲಂಚವಿರೋಧಿ

ಲಂಚ ಕೊಡುವವರನ್ನು
ತೆಗೆದುಕೊಳ್ಳುವವರನ್ನು
ಹಿಡಿದು ಒದೆಯಬೇಕು
ಇತ್ಯಾದಿ ಬಂಡಾಯದ ಮಾತಾಡುತ್ತಿದ್ದ
ಮೊನ್ನೆ ತಮ್ಮನ ನೌಕರಿಗೆ
'ಪ್ರೀತಿಯ ಕಾಣಿಕೆ'ಯೆಂದು
ಹತ್ತು ಸಾವಿರ ಕೊಟ್ಟ
ಹಲ್ಕಿರಿದೆ

## ನೀನು

ನೀನೊಂದು ಹೂ ತುಂಬಿದ ಬಳ್ಳಿ
ಎಲ್ಲಿ ಮುಟ್ಟಿದರೂ ಮೃದು
ಎಲ್ಲಿ ಮೂಸಿದರೂ ಸುವಾಸನೆ

## ಸ್ವರ್ಗ

ಸ್ವರ್ಗ ನೋಡಬೇಕಂತ
ಒಂದೊಂದಽ ಮೆಟ್ಟಿಲಾ ಹತ್ತಿ
ಇಲ್ಲೇ ಇಷ್ಟ ಸುಖ ಇರುವಾಗ
ಸಿಂಹಾಸನದ ಮ್ಯಾಲ ಎಷ್ಟಿರಬಾರದಂತ
ಕನಸ ಕಾಣಕೊಂತ ಏರುವಾಗ
ಸ್ವರ್ಗ ಅನಾಮತ್ತಾಗಿ ಎತ್ತಿ
ಪಾತಾಳಕ್ಕೆ ಒಗೀತು

## ಕಳ್ಳಿ

ಕಣ್ಮುಚ್ಚಿ
ಮೈ ತುಂಬ ಕೈಯಾಡಿಸುತ್ತ
''ಏ ಕಳ್ಳಿ ನನ್ನ ಹೃದಯಾ
ಎಲ್ಲಿ ಬಚ್ಚಿಟ್ಟಿ'' ಎಂದೆ
ಆಡಿಸುವ ಕೈ ಹಿಡಿದು
ಎದೆಯ ಗೂಡಿನ ಮೇಲಿಟ್ಟುಕೊಂಡು
''ಒಳಗೇನಾರ ಇಟ್ಟಿರುವಿ ಏನೋ
ನೋಡೋ ಕಳ್ಳ'' ಎನಬೇಕೆ ?

## ಮದುವೆ ?

ಹಕ್ಕಿಗಳು
ಯಾವಾಗಲೂ
ಜತೆಯಾಗಿಯೇ ಇರುತ್ತವೆ
ಯಾಕೆಂದರೆ
ಅವು ಮದುವೆಯಾಗಿರುವದಿಲ್ಲ

## ರಾಕ್ಷಸ

ಮಧುರ ಕ್ಷಣಗಳು
ಬಂದವೆಂದು
ಹಿಗ್ಗಿ ಹಿಗ್ಗಿ ರಸ ಕುಡಿಯಲು
ಬಗ್ಗಿದೆ
ತಿಳಿಯದಂತೆ
ರಾಕ್ಷಸ
ಹಿಂದಿನಿಂದ ಒದ್ದ

## ನನ್ನವಳು

ನನ್ನವಳು
ಭೂಮಿ
ಹೀಗಾಗಿ ಭೂಕಂಪಗಳು
ಆಗುತ್ತಲೇ ಇರುತ್ತವೆ

## ಧೈರ್ಯ

''ಹೆಂಡತಿಯ ನೆನೆಸಿಕೊಂಡು
ಇಷ್ಟೇಕೆ ಹೆದರುವೆಯೋ ಹೇಡಿ''
ಎಂದು ಮೀಸಿ ತಿರುವುತ್ತಿದ್ದ ಗೆಳೆಯ
ದೂರದಲ್ಲಿ ತನ್ನ ಹೆಂಡತಿ ಬರುವದನ್ನು ಕಂಡು
ನಡಗುತ್ತ ಜಾಗ ಖಾಲಿ ಮಾಡಿದ

ಸಿ.ಜಿ. ಹಿರೇಮಠ ನನ್ನಂಥ ಹಲವು ಬಂಡಾಯ ಸಂಗಾತಿಗಳಿಗೆ ಅಣ್ಣನ ಅಕ್ಕರೆ, ಅಂತಃಕರಣ ಹಾಗೂ ಕಕ್ಕುಲಾತಿಗಳನ್ನು ಧಾರೆಯೆರೆಯುತ್ತಿರುವ ಪ್ರೀತಿ ತುಂಬಿದ ಮನುಷ್ಯ. ಪ್ರಗತಿಪರ ಸಂಘಟನೆ, ಚಳುವಳಿಗಳು ಜಡಗೊಂಡಿರುವಾಗ ಅವುಗಳನ್ನು ಚಲನಶೀಲಗೊಳಿಸುವ ಯಾವುದೇ ಸಣ್ಣ ಪ್ರಯತ್ನದಲ್ಲೂ ತಪ್ಪದೇ ಹಾಜರಾಗುವಷ್ಟು ಬದ್ಧತೆ ಇರುವ ವ್ಯಕ್ತಿ. ಯೌವನದ ಭರ್ಜರಿ ದಿನಗಳಲ್ಲಿ ಹಣೆಯಲ್ಲಿ ವಿಭೂತಿ ಧರಿಸಿ, ಕೊರಳಲ್ಲಿ ಗುಣಗಡಿಗಿ ಕಟ್ಟಿ, ಎಲ್ಲ ಸಾಂಪ್ರದಾಯಿಕ ಮೌಲ್ಯಗಳ ಅಪರಾವತಾರವಾಗಿದ್ದ ತಾನು ಎಂಭತ್ತರ ದಶಕದ ಬಂಡಾಯ ಸಾಹಿತ್ಯ ಸಂಘಟನೆ ಚಳುವಳಿಗಳ ಪ್ರಭಾವಕ್ಕೊಳಗಾಗಿ ವಿಭೂತಿ ಗುಣಗಡಿಗೆಗಳ ಜತೆಗೆ ಸಾಂಪ್ರದಾಯಿಕ ಮೌಲ್ಯಗಳಿಗೂ ಇತಶ್ರೀ ಹಾಡಿ, ಪ್ರಗತಿಪರ ಆಶಯಗಳನ್ನು ತನ್ನಲ್ಲಿ ತಾನೇ ರೂಪಿಸಿಕೊಂಡ ರೋಮಾಂಚಕಾರಿ ಕತೆಯನ್ನು ಉತ್ಸಾಹದಿಂದ ಹೇಳಿಕೊಳ್ಳುವಷ್ಟು ಪ್ರಾಮಾಣಿಕ ಹಾಗೂ ಆತ್ಮಾವಲೋಕಿ. ಹೀಗಾಗಿ ಈ ಮನುಷ್ಯ ಬಂಡಾಯ ಚಳುವಳಿಯ ಸಾಧನೆಯ ದಾಖಲೆಯಾಗಿ ನಮ್ಮೆದುರು ನಿಂತಿರುವ ಜೀವಂತ ಮರ.

ಕೇಳಲು ಸಿದ್ಧವಿದ್ದರೆ ಈ ಹಿಂದೆ ಓದಿದ ಕವಿತೆಗಳನ್ನೇ ಪಟಪಟನೇ ಓದಿ ಬಿಡಬಲ್ಲ ಹಾಗೂ ಆ ಕವಿತೆಗಳನ್ನು ಪ್ರಕಟಿಸಲು ಸೂಚಿಸಿದರೆ ಸಂಕೋಚದ ಮುದ್ದೆಯಾಗಬಲ್ಲ ಮುಗ್ಧತೆಯಿಂದಾಗಿ ತನ್ನ ಬಗೆಗಿನ ಇತರರ ಪ್ರೀತಿಯನ್ನು ಹೆಚ್ಚಿಸಿಕೊಂಡವರು ಈ ಸಿ.ಜಿ.

ತನ್ನ ಹಾಗೂ ಸಮಾಜದೊಳಗಿನ ಸಾಂಪ್ರದಾಯಿಕ ಮೌಲ್ಯಗಳ ವಿರುದ್ಧ ಏಕಕಾಲಕ್ಕೆ ಬಂಡಾಯವೇಳುವ ಗುಣದಿಂದ ಇವರ ಕೆಲವು ಉತ್ತಮ ಕವಿತೆಗಳಿಗೆ ತಾಜಾತನ, ಉತ್ಸಾಹ ಹಾಗೂ ಹಸಿತನ ಸಹಜವಾಗಿ ಲಭಿಸಿವೆ. ಬರ ಹಾಗೂ ಕೋಮುವಾದದ ತಲ್ಲಣ, ದಾಂಪತ್ಯ ಜೀವನದ ಸಿಹಿಕಹಿಗಳನ್ನು ಸಮರ್ಥವಾಗಿ ಚಿತ್ರಿಸಿರುವ ಈ ಅಣ್ಣನ ಶ್ರೀಮಂತ ಅನುಭವ, ಸೂಕ್ಷ್ಮ ಗ್ರಹಿಕೆ ಹಾಗೂ ಅಭಿವ್ಯಕ್ತಿ ಸಾಧ್ಯತೆಗಳು ಭವಿಷ್ಯತ್ತಿನಲ್ಲಿ ಸಂಪೂರ್ಣವಾಗಿ ಹೊರಹೊಮ್ಮಲು ಈ ಸಂಕಲನದ ಪ್ರಕಟಣೆ ಪ್ರೇರಣೆ ನೀಡಲಿ ಎಂದು ಹಾರೈಸುತ್ತೇನೆ.

ಸವಣೂರು

**ಎಂ.ಡಿ. ಒಕ್ಕುಂದ**



◆ ಲಡಾಯಿ ಪ್ರಕಾಶನ ಗದಗ

**ಬೆಲೆ : ರೂ. ೩೦**